ಲಿಖಿತ ಮೂಲಕ ಉತ್ತರಿಸುವ

ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಅಗ್ನಿಶಾಮಕ ಇಲಾಖೆಯ ಸಿಬ್ಬಂದಿಗಳನ್ನು SDRF ನಿಯೋಜನೆ ಮಾಡಿರುವ ಬಗ್ಗೆ

ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ):-

1311 (1432) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯ ವಿಪತ್ತು ಸ್ಪಂದನಾ ಪಡೆ SDRF ಅನ್ನು ರಚಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, SDRF ರಚಿಸಲು ಇರುವ ಮಾರ್ಗಸೂಚಿಗಳೇನು ಹಾಗೂ ಬಿಡುಗಡೆಯಾದ ಅನುದಾನವೆಷ್ಟು;

(ಆ) SDRF ರಚಿಸಲು ಮಂಜೂರಾಗಿರುವ ಹುದ್ದೆಗಳು ಎಷ್ಟು; ಹುದ್ದೆಗಳನ್ನು ಭರ್ತಿ ಮಾಡಲು ಇರುವ ಮಾನದಂಡಗಳೇನು;

(ಇ) ಕರ್ನಾಟಕ ರಾಜ್ಯ ಅಗ್ನಿಶಾಮಕ ಇಲಾಖೆಗೆ ಮಂಜೂರಾಗಿರುವ ಹುದ್ದೆಗಳೆಷ್ಟು; ಈ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಗಳೆಷ್ಟು ಹಾಗೂ ಖಾಲಿ ಇರುವ ಹುದ್ದೆಗಳೆಷ್ಟು; (ಮಾಹಿತಿ ನೀಡುವುದು)

(ಈ) ಅಗ್ನಿಶಾಮಕ ಇಲಾಖೆಯಲ್ಲಿ ಹಾಲಿ ಸಿಬ್ಬಂದಿಗಳ ಕೊರತೆ ಇದ್ದರೂ ಸಿಬ್ಬಂದಿಗಳನ್ನು SDRFಗೆ ನಿಯೋಜಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದಕ್ಕೆ ಅಗ್ನಿಶಾಮಕ ಇಲಾಖೆಯ ಸಿಬ್ಬಂದಿಗಳ ಒಪ್ಪಿಗೆ ಪಡೆಯಲಾಗಿದೆಯೇ; ಇಲ್ಲದಿದ್ದಲ್ಲಿ ಹೇಗೆ ನಿಯೋಜಿಸಲಾಗುತ್ತಿದೆ;

(ಉ) SDRF ನಿಯೋಜಿಸಿದಲ್ಲಿ ಇಲಾಖೆಯಲ್ಲಿ ಸಿಬ್ಬಂದಿಗಳ ಕೊರತೆಯುಂಟಾಗಿ ಅಗ್ನಿ ಅನಾಹುತಗಳು ತುರ್ತು ಕಾರ್ಯಗಳನ್ನು ನಿರ್ವಹಿಸಲು ತೊಂದರೆಯಾಗಿರುವುದನ್ನು ಯಾವ ರೀತಿ ನೀಗಿಸಲಾಗುವುದು;

(ಊ) ಅಗ್ನಿಶಾಮಕ ಇಲಾಖೆಯ ಸಿಬ್ಬಂದಿಗಳನ್ನು SDRFಗೆ ನಿಯೋಜಿಸಿ ಅಗ್ನಿ ಅನಾಹುತ ನಂದಿಸುವ ಕಾರ್ಯಕ್ಕೆ ಅನುಭವಿಗಳಾದ ಗೃಹರಕ್ಷಕರನ್ನು ನಿಯೋಜಿಸಿದರೆ ಅನಾಹುತಗಳಾವುದಿಲ್ಲವೇ; ಇವೆಲ್ಲವುಗಳನ್ನು ತಪ್ಪಿಸಲು ಸರ್ಕಾರವು ಕೈಗೊಳ್ಳುವ ಕ್ರಮಗಳೇನು;

(ಋ) SDRFಗೆ ನಿಯೋಜಿಸುತ್ತಿರುವ ಅಗ್ನಿಶಾಮಕ ದಳದ ಸಿಬ್ಬಂದಿಯವರನ್ನು ಇಲಾಖೆಯಲ್ಲಿ ಅಗ್ನಿ ನಂದಿಸುವ ಕಾರ್ಯದಲ್ಲಿ ಮುಂದುವರೆಸಲಾಗುವುದೇ?